**ಕರ್ನಾಟಕ ವಿಧಾನ ಪರಿಷತ್ತು**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 515 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮುನಿರಾಜು ಗೌಡ ಪಿ.ಎಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | 21.02.2022 |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಹಾಲಿ ಇರುವ ಸಂಜೆ ಇಂಜಿನಿಯರಿಂಗ್ ಕಾಲೇಜ್ ಮತ್ತು ಸಂಜೆ ಪಾಲಿಟೆಕ್ನಿಕ್‌ಗಳನ್ನು ಮುಚ್ಚಲು ಕ್ರಮ ಕೈಗೊಳ್ಳಲಾಗುತ್ತಿದೆಯೇ; | ರಾಜ್ಯದಲ್ಲಿ ಹಾಲಿ ಇರುವ ಸಂಜೆ ಇಂಜಿನಿಯರಿಂಗ್ ಕಾಲೇಜ್ ಮತ್ತು ಸಂಜೆ ಪಾಲಿಟೆಕ್ನಿಕ್‌ಗಳನ್ನು ಮುಚ್ಚಲು ಯಾವುದೇ ಕ್ರಮಕೈಗೊಳ್ಳುತ್ತಿಲ್ಲ.<br><br>ಪರಿಷ್ಕೃತ ಎಐಸಿಟಿಇ, ನವದೆಹಲಿಯವರ ನಿಯಮ ಹಾಗೂ ಮಾರ್ಗಸೂಚಿಯನ್ವಯ ಸಂಜೆ ಅವಧಿಯಲ್ಲಿ ಇಂಜಿನಿಯರಿಂಗ್ ಕಾಲೇಜು ನಡೆಸಲು ಅವಕಾಶವಿದ್ದು, 3 ವರ್ಷದ ಅವಧಿಯ ಬದಲಾಗಿ Regular course ಗಳಂತೆ 4 ವರ್ಷ ವ್ಯಾಸಂಗ ಮಾಡಬೇಕಾಗಿದೆ..<br><br>ಸಂಜೆ ಅವಧಿಯಲ್ಲಿ ನಡೆಸುವ ಪಾಲಿಟೆಕ್ನಿಕ್‌ಗಳಲ್ಲಿ 3 ವರ್ಷದ ಡಿಪ್ಲೋಮಾ ಕೋರ್ಸ್ ಸಮಸ್ಯೆ ಇಲ್ಲದೆ ನಡೆಯುತ್ತಿರುತ್ತದೆ. ಇಲಾಖೆಯ ಅಧೀನದಲ್ಲಿ 2 ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಸಂಜೆ ಅವಧಿಯಲ್ಲಿ ಕೋರ್ಸ್‌ಗಳನ್ನು ನಡೆಸುತ್ತಿದ್ದು, ಇಲ್ಲಿ ಯಾವುದೇ ಸಮಸ್ಯೆ ಇರುವುದಿಲ್ಲ.<br><br>ಸಂಜೆ ಅವಧಿಯಲ್ಲಿ ಇಂಜಿನಿಯರಿಂಗ್ ಕಾಲೇಜು ಮತ್ತು ಪಾಲಿಟೆಕ್ನಿಕ್‌ಗಳಲ್ಲಿನ ವಿದ್ಯಾರ್ಥಿಗಳಿಗೆ ಸಮಸ್ಯೆ ಇದ್ದಲ್ಲಿ ನಿವಾರಣೆ ಮಾಡಲು ಕ್ರಮವಹಿಸಲಾಗುವುದು. |
| ಆ) | ನಾನಾ ಕಾರಣಗಳಿಂದ ದುಡಿಮೆ ಅನಿವಾರ್ಯತೆಯಾಗಿರುವ ವಿದ್ಯಾರ್ಥಿಗಳಿಗೆ ತಾಂತ್ರಿಕ ಶಿಕ್ಷಣ ಪಡೆಯಲು ಅವಕಾಶವಿದ್ದ ಸಂಜೆ ಇಂಜಿನಿಯರಿಂಗ್ ಕಾಲೇಜ್ ಮತ್ತು ಸಂಜೆ ಪಾಲಿಟೆಕ್ನಿಕ್‌ಗಳನ್ನು ಮುಚ್ಚುವುದರಿಂದ ಉದ್ಯೋಗ ಮಾಡಿಕೊಂಡು ತಾಂತ್ರಿಕ ಶಿಕ್ಷಣದಲ್ಲಿ ಡಿಪ್ಲೋಮಾ ಮತ್ತು ಪಡೆಯುವ ಉದ್ದೇಶ ಹೊಂದಿರುವ ವಿದ್ಯಾರ್ಥಿಗಳಿಗೆ ಕಾಲೇಜುಗಳನ್ನು ಮುಚ್ಚುವ ನಿರ್ಧಾರದಿಂದ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಸಂಜೆ ಕಾಲೇಜುಗಳನ್ನು ಮುಚ್ಚುವ ನಿರ್ಧಾರದಿಂದ ಉಂಟಾಗುತ್ತಿರುವ ಸಮಸ್ಯೆ ನಿವಾರಣೆಗೆ ಏನು ಕ್ರಮ ಕೈಗೊಳ್ಳುತ್ತಿದೆ? | |

ಇಡಿ 21 ಟಿಇಸಿ 2022

(ಡಾ॥ ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ&ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ
ಇಲಾಖೆ ಸಚಿವರು